| ಕ್ರಮ ಸಂಖ್ಯೆ | ಮೋದಿ ಹಾಗೂ ತೋಶಿಬಾ ಸಂಸ್ಥೆಯ ಕಾಪಿಯರ್ ಯಂತ್ರಗಳ ನಮೂನೆ | ಸಂಖ್ಯೆ |
|---|---|---|
| 1. | 5216 ಮೋದಿ | 01 |
| 2. | 5223 ಮೋದಿ | 02 |
| 3. | 5620 ಮೋದಿ | 01 |
| 4. | 2060 ತೋಶಿಭಾ | 06 |
| 5. | 4550 ತೋಶಿಭಾ | 01 |
| 6. | 2860 ತೋಶಿಭಾ | 01 |
| | ಒಟ್ಟು | 12 |

ಇಚ್ಛೆಯುಳ್ಳವರು ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ (ಲೆಕ್ಕಪತ್ರ ಶಾಖೆ) ಕೊಠಡಿ ಸಂಖ್ಯೆ: 129, ಮೊದಲನೇ ಮಹಡಿ, ವಿಧಾನಸೌಧ, ಇಲ್ಲಿ (ಕಛೇರಿ ವೇಳೆಯಲ್ಲಿ) ರೂ.100-00 + ಶೇಕಡ 8 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀತಿಯನ್ನು ಪಡೆದು ಆನಂತರ ಟೆಂಡರ್ ನಮೂನೆಯನ್ನು ಉಪ ಕಾರ್ಯದರ್ಶಿ, ಕರ್ನಾಟಕ ವಿಧಾನಸಭೆ ಸಚಿವಾಲಯ, ಕೊಠಡಿ ಸಂಖ್ಯೆ: 127/A, ಮೊದಲನೇ ಮಹಡಿ, ವಿಧಾನಸೌಧ, ಬೆಂಗಳೂರು-560001, ಇಲ್ಲಿ ರಸೀತಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ: 22.12.2004 ರಂದು ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ನೀಡಲಾಗುವುದು. ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 22.12.2004 ರಂದು ಮಧ್ಯಾಹ್ನ 3.30 ಗಂಟೆ ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 131, ವಿಧಾನಸೌಧ, ಬೆಂಗಳೂರು-560001, ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 23.12.2004 ರಂದು ಮಧ್ಯಾಹ್ನ 3.00 ಗಂಟೆಗೆ ತೆರೆಯಲಾಗುವುದು ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದ ದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಮೊಹರಾದ ಟೆಂಡರ್‌ಗಳ ಲಕೋಟೆಯ ಮೇಲೆ "ಮೋದಿ ಕಾಪಿಯರ್‌ಗಳು ಹಾಗೂ ತೋಶಿಭಾ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ದರಪಟ್ಟಿ" ಎಂದು ಬರೆಯತಕ್ಕದ್ದು.
3. ಟೆಂಡರ್‌ದಾರರು ಈಗಾಗಲೇ ಇಂತಹ ಕಾಪಿಯರ್ ಯಂತ್ರಗಳ ವಾರ್ಷಿಕ ಸೇವಾ ನಿರ್ವಹಣೆ ಮಾಡುತ್ತಿರುವುದಕ್ಕೆ ದಾಖಲೆ:ಮಾಹಿತಿಯನ್ನು ಟೆಂಡರ್‌ನೊಂದಿಗೆ ಲಗತ್ತಿಸಿರಬೇಕು.
4. ದರಪಟ್ಟಿಯನ್ನು ನೀಡುವ ಸಂಸ್ಥೆಗಳು ಈ ಮೇಲ್ಕಂಡ ಯಂತ್ರಗಳ ದುರಸ್ಥಿಗೆ ಬೇಕಾಗುವ ಬಿಡಿ ಭಾಗಗಳ ದಾಸ್ತಾನಿನ ಬಗ್ಗೆ ಮಾಹಿತಿ ನೀಡಬೇಕು.
5. ಪ್ರತಿ ನಮೂನೆಯ ಯಂತ್ರಕ್ಕೂ ಪ್ರತ್ಯೇಕ ವಾರ್ಷಿಕ ಸೇವಾ ನಿರ್ವಹಣೆ ದರ ಸೂಚಿಸಬೇಕು (Comprehensive) ಹಾಗೂ ಸೂಚಿಸಿದ ದರಕ್ಕೆ ತೆರಿಗೆಗಳಿದ್ದಲ್ಲಿ ಪ್ರತ್ಯೇಕ ನಮೂದಿಸಬೇಕು.
6. ಮುಂಗಡ ಠೇವಣಿ ಮೊತ್ತ ರೂ.5,000-00ಗಳನ್ನು ಡಿ.ಡಿ. ಮುಖಾಂತರ ಕಾರ್ಯದರ್ಶಿಗಳು, ಕರ್ನಾಟಕ ವಿಧಾನ ಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು-560001, ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು. ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
7. ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
8. ವಾರ್ಷಿಕ ಸೇವಾ ನಿರ್ವಹಣೆಯನ್ನು ವಹಿಸಿದಲ್ಲಿ ದೂರು ಬಂದಾಗ ದುರಸ್ಥಿ ಪಡಿಸುವುದಲ್ಲದೇ ಕನಿಷ್ಠ ತಿಂಗಳಿಗೆ ಎರಡು ಬಾರಿ ತಂತ್ರಜ್ಞರಿಂದ ನಿರೋಧಕ ನಿರ್ವಹಣೆ (Preventive Maintenance) ಮಾಡಿಸತಕ್ಕದ್ದು. ಒಬ್ಬ ತಂತ್ರಜ್ಞರನ್ನು ಖಾಯಂ ಆಗಿ ವಾರ್ಷಿಕ ಸೇವಾ ನಿರ್ವಹಣೆ ಅವಧಿಯಲ್ಲಿ ಸಚಿವಾಲಯಕ್ಕೆ ನಿಯೋಜಿಸುವುದು.
9. ತೃಪ್ತಿಕರವಾಗಿ ಸರ್ವೀಸ್ ಮಾಡಿದ ಬಗ್ಗೆ ದೃಢೀಕರಣ ಆಧಾರದ ಮೇಲೆ ಪ್ರತಿ 3 ತಿಂಗಳಿಗೊಮ್ಮೆ 4 ಕಂತುಗಳಲ್ಲಿ ಸೇವಾ ಹಣವನ್ನು ಸಂದಾಯ ಮಾಡಲಾಗುವುದು.

ಇನ್ನು ಹೆಚ್ಚಿನ ವಿವರಗಳಿಗೆ ಉಪ ಕಾರ್ಯದರ್ಶಿ, (ಕಾರ್ಯಕಾರಿ ಶಾಖೆ) ಕರ್ನಾಟಕ ವಿಧಾನಸಭೆ ಸಚಿವಾಲಯ, ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22092414 ಅಥವಾ 22259273 ರಲ್ಲಿ ಸಂಪರ್ಕಿಸಬಹುದು.

**ಕೆ. ಚಿನ್ನಸ್ವಾಮಿ**

ಪಿ.ಆರ್.542 ಉಪ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ.

**ಕರ್ನಾಟಕ ವಿಧಾನ ಸಭೆ ಸಚಿವಾಲಯ**

**ವಿಧಾನ ಸಭೆಯ ಸಚಿವಾಲಯ, ಅಂಚೆ ಪೆಟ್ಟಿಗೆ ಸಂಖ್ಯೆ: 5074, ವಿಧಾನಸೌಧ, ಬೆಂಗಳೂರು-560 001**

**ಟೆಂಡರ್ ಪ್ರಕಟಣೆ**

**ಕ್ರ.ಸಂ.ವಿಸಸ/ಕಾಕಾ(ಉ)/8:ಸ್ವಸಾಸ/04 ದಿನಾಂಕ: 26ನೇ ನವೆಂಬರ್ 2004**

ಕರ್ನಾಟಕ ವಿಧಾನ ಸಭೆ ಸಚಿವಾಲಯದ ಕಛೇರಿ ಕಟ್ಟಡಗಳ ಸ್ವಚ್ಛತೆಗಾಗಿ ಈ ಕೆಳಕಂಡ ಸ್ವಚ್ಛತಾ ಪದಾರ್ಥಗಳನ್ನು ಆಗಿಂದಾಗ್ಗೆ ಅಗತ್ಯಕ್ಕೆ ತಕ್ಕ ಪ್ರಮಾಣದಲ್ಲಿ ಖರೀದಿಸಲು ಉದ್ದೇಶಿಸಲಾಗಿದೆ. ಈ ಸಂಬಂಧ ಮಾರಾಟಗಾರರಿಂದ ಸ್ವಚ್ಛತಾ ಪದಾರ್ಥಗಳ ಸರಬರಾಜಿಗಾಗಿ ಒಂದು ವರ್ಷದ ಅವಧಿಗೆ ದರಗಳನ್ನು ನಿಗದಿಪಡಿಸಲು ಮೊಹರಾದ ಟೆಂಡರ್‌ಗಳನ್ನು ಆಹ್ವಾನಿಸಲಾಗಿದೆ.

| ಕ್ರಮ ಸಂಖ್ಯೆ | ಸ್ವಚ್ಛತಾ ಸಾಮಗ್ರಿಗಳ ವಿವರ | Approximate total quantity for one year |
|---|---|---|
| 1. | ಫೆನಾಯಿಲ್ | 2000 ಲೀಟರ್ |
| 2. | ವಿಮ್ ಪೌಡರ್ | 700 ಕೆ.ಜಿ. |
| 3. | ಬ್ಲೀಚಿಂಗ್ ಪೌಡರ್ | 600 ಕೆ.ಜಿ. |
| 4. | ನ್ಯಾಪ್ತಲಿನ್ ಬಾಲ್ಸ್ | 350. ಕೆ.ಜಿ. |
| 5. | ಯೂರಿನಲ್ ಕೇಕ್ಸ್ | 1500 ನಂ. |
| 6. | ಆಸಿಡ್ | 500 ಲೀಟರ್ |
| 7. | ಗೋಣಿತಾಟು | 200 ಮೀಟರ್ |
| 8. | ನೆಲಒರೆಸುವ ಬಟ್ಟೆ | 200 ಕೆ.ಜಿ |
| 9. | ಕಾಯರ್ ರೌಂಡ್ ಬ್ರಷ್ | 100 ನಂ. |
| 10. | ಹ್ಯಾಂಡ್ ಬ್ರಷ್ (ಪ್ಲಾಸ್ಟಿಕ್) | 100 ನಂ. |
| 11. | ಪ್ಲಾಸ್ಟಿಕ್ ಪ್ಲಾಟ್ ಬ್ರಷ್ | 100 ನಂ. |
| 12. | ಸೋಪು ದ್ರಾವಣ | 500 ಲೀಟರ್ |
| 13. | ಪ್ಲಾಸ್ಟಿಕ್ ಮೊಗ್ಗು | 100 ನಂ. |
| 14. | ಪ್ಲಾಸ್ಟಿಕ್ ಬಕೇಟ್ (ಚಿಕ್ಕದು) | 100 ನಂ. |
| 15. | ಪ್ಲಾಸ್ಟಿಕ್ ಬಕೇಟ್ (ದೊಡ್ಡದು) | 50 ನಂ. |
| 16. | ರೂಮ್‌ಸ್ಪ್ರೇ | 500 ನಂ. |
| 17. | ಪ್ಲಾಸ್ಟಿಕ್ ಮರ | 50 ನಂ. |
| 18. | ಜಾಡು ಕೋಲು (ಪ್ಲಾಸ್ಟಿಕ್) | 50 ನಂ. |
| 19. | ಬ್ರೂಮ್ (ತೆಂಗಿನ) | 500 ನಂ. |
| 20. | ಬಾಂಬೆ ಬ್ರೂಮ್ಸ್ | 500 ನಂ. |
| 21. | ಗಣಕ ಯಂತ್ರ ಕ್ಲೀನಿಂಗ್ ಲಿಕ್ವಿಡ್ | 24 ನಂ. |
| 22. | ಕಸ ಹಾಕುವ ಬುಟ್ಟಿ (ಪ್ಲಾಸ್ಟಿಕ್) | 50 ನಂ. |

ಇಚ್ಛೆಯುಳ್ಳ ಮಾರಾಟಗಾರರು ಅಧೀನ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ (ಲೆಕ್ಕಪತ್ರ ಶಾಖೆ) ಕೊಠಡಿ ಸಂಖ್ಯೆ: 129, ಮೊದಲನೇ ಮಹಡಿ, ವಿಧಾನಸೌಧ, ಇಲ್ಲಿ ರೂ. 100-00 ಮತ್ತು ಶೇಕಡ 8 ರಂತೆ ಮಾರಾಟ ತೆರಿಗೆಯನ್ನು ನಗದು ಅಥವಾ ಡಿಮಾಂಡ್ ಡ್ರಾಫ್ಟ್ ರೂಪದಲ್ಲಿ ನೀಡಿ ರಸೀತಿಯನ್ನು ಪಡೆದು ಆನಂತರ ಟೆಂಡರ್ ನಮೂನೆಯನ್ನು ಉಪ ಕಾರ್ಯದರ್ಶಿ, (ಕಾರ್ಯಕಾರಿ ಶಾಖೆ) ಕರ್ನಾಟಕ ವಿಧಾನ ಸಭೆ ಸಚಿವಾಲಯ, ಕೊಠಡಿ ಸಂಖ್ಯೆ: 127/ಎ, ಮೊದಲನೇ ಮಹಡಿ, ವಿಧಾನಸೌಧ, ಇಲ್ಲಿ ರಸೀತಿಯನ್ನು ತೋರಿಸಿ ಪಡೆದುಕೊಳ್ಳಬಹುದು. ದಿನಾಂಕ: 22.12.2004 ರಂದು ಮಧ್ಯಾಹ್ನ 1.00 ಗಂಟೆಯವರೆಗೆ ಟೆಂಡರ್ ಫಾರಂಗಳನ್ನು ಮಾರಾಟ ಮಾಡಲಾಗುವುದು ಈ ಟೆಂಡರ್ ನಮೂನೆಗೆ ನೀಡಿದ ಮೊತ್ತವನ್ನು ಯಾವುದೇ ಕಾರಣಕ್ಕೂ ಹಿಂದಿರುಗಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಸಲ್ಲಿಸಲು ಕೊನೆಯ ದಿನಾಂಕ: 22.12.2004 ರಂದು ಮಧ್ಯಾಹ್ನ 3.30 ಗಂಟೆ ನಂತರ ಬಂದ ಟೆಂಡರ್ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

ಟೆಂಡರ್‌ಗಳನ್ನು ಟೆಂಡರ್ ಬುಲೆಟಿನ್ ಅಧಿಕಾರಿಯವರು ಕೊಠಡಿ ಸಂಖ್ಯೆ: 131, ವಿಧಾನಸೌಧ, ಬೆಂಗಳೂರು-560001, ಇಲ್ಲಿ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 24.12.2004 ರಂದು ಮಧ್ಯಾಹ್ನ 4.30 ಗಂಟೆಗೆ ತೆರೆಯಲಾಗುವುದು ಟೆಂಡರ್ ತೆರೆಯುವ ದಿನಾಂಕವು ಯಾವುದಾದರೂ ಸಾರ್ವತ್ರಿಕ ರಜಾ ದಿನವಾದಲ್ಲಿ ಮಾರನೆಯ ಕೆಲಸದದಿನ ಅದೇ ವೇಳೆ ಮತ್ತು ಅದೇ ಸ್ಥಳದಲ್ಲಿ ತೆರೆಯಲಾಗುವುದು.

1. ಟೆಂಡರ್ ಫಾರಂಗಳನ್ನು ಈ ಕಛೇರಿಯಿಂದಲೇ ಖರೀದಿಸಿ ದ್ವಿಪ್ರತಿಯಲ್ಲಿ ಸಲ್ಲಿಸತಕ್ಕದ್ದು.
2. ಮುಂಗಡ ಠೇವಣಿ ಮೊತ್ತವು ರೂ. 5,000-00ಗಳನ್ನು ಡಿ.ಡಿ. ಮುಖಾಂತರ ಕಾರ್ಯದರ್ಶಿಗಳು, ವಿಧಾನಸಭೆ ಸಚಿವಾಲಯ, ವಿಧಾನಸೌಧ, ಬೆಂಗಳೂರು-560001, ಇವರಿಗೆ ಸಂಭೋದಿಸಿ ಲಗತ್ತಿಸತಕ್ಕದ್ದು. ಮೂಲ ಬ್ಯಾಂಕ್ ಡಿಮ್ಯಾಂಡ್ ಡ್ರಾಫ್ಟ್‌ನ್ನು ಲಗತ್ತಿಸಿರದ ಟೆಂಡರ್‌ಗಳನ್ನು ತಿರಸ್ಕರಿಸಲಾಗುವುದು.
3. ದರಪಟ್ಟಿಯೊಂದಿಗೆ ಮಾರಾಟ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ನಮೂನೆ 53ರಲ್ಲಿ ಹಾಗೂ ಆದಾಯ ತೆರಿಗೆ ಕ್ಲಿಯರೆನ್ಸ್ ಸರ್ಟಿಫಿಕೇಟ್ ಸಲ್ಲಿಸತಕ್ಕದ್ದು.
4. ಸರಬರಾಜು ಮಾಡುವ ಸಾಮಗ್ರಿಗಳಿಗೆ 90 ದಿನಗಳವರೆಗಿನ ದರ ಸಿಂಧುತ್ವ ಇರಬೇಕು.
5. ಇನ್ನು ಹೆಚ್ಚಿನ ವಿವರಗಳಿಗೆ ಉಪ ಕಾರ್ಯದರ್ಶಿ, (ಕಾರ್ಯಕಾರಿ ಶಾಖೆ) ಕರ್ನಾಟಕ ವಿಧಾನಸಭೆ ಸಚಿವಾಲಯ, ಇವರನ್ನು ಕಛೇರಿ ವೇಳೆಯಲ್ಲಿ ಖುದ್ದಾಗಿ ಅಥವಾ ದೂರವಾಣಿ ಸಂಖ್ಯೆ: 22092414 ಅಥವಾ 22259273 ರಲ್ಲಿ ಸಂಪರ್ಕಿಸಬಹುದು.

**ಕೆ. ಚಿನ್ನಸ್ವಾಮಿ**

ಪಿ.ಆರ್.543 ಉಪ ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಸಚಿವಾಲಯ.

**ತೋಟಗಾರಿಕೆ ಇಲಾಖೆ**

**ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರ ಕಛೇರಿ, (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್ ಬೆಂಗಳೂರು**

**ಟೆಂಡರ್ ಪ್ರಕಟಣೆ**

**ಸಂಖ್ಯೆ: ಹಿಸತೋನಿ:ರಾವ:ಬೆಂಗ್ರಾ:ಆದೀ:04-05 ದಿನಾಂಕ: 22ನೇ ನವೆಂಬರ್ 2004**

**ವಿಷಯ :** ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು ರವರ ಕಛೇರಿ ಅಧೀನ ಬರುವ ತೋಟಗಾರಿಕೆ ಕ್ಷೇತ್ರ: ಸಸ್ಯಾಗಾರಗಳಲ್ಲಿ ಪಾಲಿಮನೆ: ಶೇಡೆನೆಟ್ ಪೆಂಡಾಲ್ ಮುಂತಾದವುಗಳನ್ನು ನಿರ್ಮಾಣ ಮಾಡಲು ಟೆಂಡರ್ ಪ್ರಕಟಣೆ.

ಈ ಮೂಲಕ ಸಾರ್ವಜನಿಕರ ಮತ್ತು ಆಸಕ್ತ ಟೆಂಡರ್‌ದಾರರ ಗಮನಕ್ಕೆ ತಿಳಿಸುವುದೇನೆಂದರೆ, ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು ರವರ ಕಛೇರಿ ಅಧೀನ ಬರುವ ತೋಟಗಾರಿಕೆ ಕ್ಷೇತ್ರಗಳು ಮತ್ತು: ಸಸ್ಯಾಗಾರಗಳಲ್ಲಿ ಈ ಕೆಳಕಂಡಂತೆ ಸ್ಪಷ್ಟೀಕರಿಸಿರುವ ವಸ್ತುಗಳನ್ನು ಬಳಸಿ ಪಾಲಿಹೌಸ್ ಮತ್ತು ಶೇಡ್ ನೆಟ್ ಪೆಂಡಾಲ್ ನಿರ್ಮಿಸುವ ಬಗ್ಗೆ ಟೆಂಡರ್ ಕರೆಯಲಾಗಿದೆ.

**ಪಾಲಿಹೌಸ್: ಶೇಡ್‌ನೆಟ್ ಪೆಂಡಾಲ್** ನಿರ್ಮಿಸಲು

**ಷರತ್ತು ಮತ್ತು ನಿಬಂಧನೆಗಳು:**

1. ಪ್ರತಿಯೊಬ್ಬ ಟೆಂಡರ್‌ದಾರರು ಮುಂಗಡವಾಗಿ 5000-00 ರೂಗಳ ಡಿಮ್ಯಾಂಡ್ ಡ್ರಾಫ್ಟ್‌ನ್ನು ಟೆಂಡರ್ ಅರ್ಜಿಯೊಂದಿಗೆ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ರವರ ಹೆಸರಿನಲ್ಲಿ ಪಾವತಿಯಾಗುವಂತೆ ಪಡೆದು ಲಗತ್ತಿಸಿರಬೇಕು. ಡಿ.ಡಿ. ಲಗತ್ತಿಸಿರದ ಟೆಂಡರ್ ಅರ್ಜಿಗಳನ್ನು ಮಾನ್ಯ ಮಾಡುವುದಿಲ್ಲ. ಟೆಂಡರ್ ಲಕೋಟೆ ಮೇಲೆ ಪಾಲಿಹೌಸ್: ಶೇಡ್ ನೆಟ್ ಪೆಂಡಾಲ್ ನಿರ್ಮಾಣ ಕುರಿತು ಟೆಂಡರ್ ಎಂದು ನಮೂದಿಸಿರಬೇಕು.
2. ಟೆಂಡರ್ ಫಾರಂನ್ನು 29.11.04 ರಿಂದ 10.12.04 ವರೆಗೆ ರೂ.25-00 ಗಳನ್ನು ಪಾವತಿಸಿ ಕಛೇರಿ ವೇಳೆಯಲ್ಲಿ ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ) ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್ ಪಾರ್ಕ್, ಬೆಂಗಳೂರು ರವರ ಕಛೇರಿಯಿಂದ ಪಡೆಯಬಹುದು.
3. ಭರ್ತಿ ಮಾಡಿದ ಟೆಂಡರ್ ಫಾರಂಗಳನ್ನು ಸಲ್ಲಿಸಲು ದಿನಾಂಕ: 13.12.04 ರಂದು 5 ಗಂಟೆ, ಕೊನೆಯ ದಿನ ಆಗಿರುತ್ತದೆ.
4. ನಿಗದಿತ ಅವಧಿಯೊಳಗೆ ತಲುಪಿದ ಮೊಹರಾದ ಟೆಂಡರ್‌ಗಳನ್ನು ಹಾಜರಿರುವ ಟೆಂಡರ್‌ದಾರರ ಸಮ್ಮುಖದಲ್ಲಿ ದಿನಾಂಕ: 14.12.04 ರಂದು 11 ಗಂಟೆಗೆ ತೆರೆಯಲಾಗುವುದು.
5. ಟೆಂಡರ್ ಯಶಸ್ವಿಯಾಗದ ಟೆಂಡರ್‌ದಾರರ ಠೇವಣಿಯನ್ನು ಟೆಂಡರ್ ಪ್ರಕ್ರಿಯೆ ಮುಗಿದ ನಂತರ ಹಿಂದಿರುಗಿಸಲಾಗುವುದು.
6. ಟೆಂಡರ್‌ನಲ್ಲಿ ಯಶಸ್ವಿಯಾದ ಟೆಂಡರ್‌ದಾರರು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, ರವರ ಸೂಚನೆಯನ್ನುನುಸರಿಸಿ ವಿವಿಧ ತೋಟಗಾರಿಕೆ ಕ್ಷೇತ್ರ: ಸಸ್ಯಾಗಾರಗಳಲ್ಲಿ ಪಾಲಿಮನೆ: ಶೇಡೆನೆಟ್ ಪೆಂಡಾಲ್ ಮುಂತಾದವುಗಳನ್ನು ಸ್ಪಷ್ಟೀಕರಿಸಿರುವ ವಸ್ತು ವಿನ್ಯಾಸವನ್ನು ಅನುಸರಿಸಿ ನಿರ್ಮಿಸಬೇಕು.
7. ಯು.ವಿ. ಸ್ಟಬಿಲೈಜ್ಡ್ ಬಗ್ಗೆ ದೃಢೀಕರಣವನ್ನು ಸಂಬಂಧಪಟ್ಟವರಿಂದ ಪಡೆದು ಒದಗಿಸುವುದು.
8. ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು ರವರು ನೀಡುವ ಸ್ಪಷ್ಟನೆಯಂತೆ ನಿರ್ಮಾಣ ಕಾಮಗಾರಿಯನ್ನು ತೃಪ್ತಿಕರವಾಗಿ ನಿರ್ವಹಿಸದಿದ್ದಲ್ಲಿ ಯಾವುದೇ/ ಕಾರಣ ನೀಡದೆ ಟೆಂಡರ್‌ನ್ನು ರದ್ದುಗೊಳಿಸಲಾಗುವುದು.
9. ಮಾರಾಟ ತೆರಿಗೆ, ಆದಾಯ ತೆರಿಗೆ ಮತ್ತು ಇತರೆ ತೆರಿಗೆಗಳನ್ನು ಮೂಲದಲ್ಲಿಯೇ ಕಡಿತ ಮಾಡಲಾಗುವುದು.
10. ಟೆಂಡರ್ ಅಂಗೀಕರಿಸುವ ಅಥವಾ ತಿರಸ್ಕರಿಸುವ ಅಧಿಕಾರವನ್ನು ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು (ರಾಜ್ಯವಲಯ) ಬೆಂಗಳೂರು ರವರು ಹೊಂದಿರುತ್ತಾರೆ.
11. ಮೇಲಧಿಕಾರಿಗಳ ಅನುಮೋದನೆ ದೊರೆತ ನಂತರ ಕಾರ್ಯಾದೇಶ ನೀಡಲಾಗುವುದು.

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ)
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್ ಬೆಂಗಳೂರು.

**1. ಪಾಲಿಹೌಸ್ ನಿರ್ಮಾಣದಲ್ಲಿ ಉಪಯೋಗಿಸಬೇಕಾದ ಸಲಕರಣೆ: ವಸ್ತುಗಳ ಸ್ಪಷ್ಟತೆಗಳು**

1. 2” ಅಳತೆ “ಎ” ದರ್ಜೆಯ ಐ.ಎಸ್.ಐ ಮುದ್ರಣ ಜಿ.ಐ. ಪೈಪನ್ನು 2 ಅಡಿ ತಳಪಾಯಕ್ಕೆ ಸಿಮೆಂಟ್ ಕಾಂಕ್ರೀಟನಿಂದ ಮುಚ್ಚಬೇಕು ಮತ್ತು 1 ಅಡಿ ಎತ್ತರಕ್ಕೆ ಸಿಮೆಂಟ್ ಹಾಲೋ ಬ್ಲಾಕ್: ಇಟ್ಟಿಗೆಯಿಂದ ಪಾಲಿಹೌಸ್ ಸುತ್ತಲೂ ಗೋಡೆಯನ್ನು ಕಟ್ಟಬೇಕು.
2. $1^1/_2$"ದಪ್ಪ “ಬಿ” ದರ್ಜೆಯ ಐ.ಎಸ್.ಐ. ಮುದ್ರಣ ಉತ್ತಮ ಗುಣಮಟ್ಟದ ಜಿ.ಐ.ಪೈಪನ್ನು ಪಾಲಿಹೌಸ್ ಕಂಬಕ್ಕೆ ಅಳವಡಿಸಬೇಕು.
3. 1 ”ದಪ್ಪ (ಅಳತೆ) ‘ಎ’ ದರ್ಜೆಯ ಐ.ಎಸ್.ಐ ಮುದ್ರಣದ ಜಿ.ಐ. ಪೈಪನ್ನು ಪಾಲಿಹೌಸ್ ಟ್ರಸ್: ಕಮಾನು ನಕ್ಷೆಯನ್ನು ತೋರಿಸಿರುವ ಹಾಗೆ ತಯಾರಿಸುವುದು.
4. 3:4 “ದಪ್ಪ (ಅಳತೆ) “ಎ” ದರ್ಜೆಯ ಐ.ಎಸ್.ಐ ಮುದ್ರಣದ ಜಿ.ಐ. ಪೈಪನ್ನು ಪಾಲಿಹೌಸ್‌ನ ಒಂದು ಟ್ರಸ್ ಹಾಗೂ ಮತ್ತೊಂದು ಟ್ರಸನ್ನು ಜೋಡಿಸಿ ಅಳವಡಿಸಲು ನಕ್ಷೆಯಲ್ಲಿ ತೋರಿಸಿರುವ ಹಾಗೆ.
5. $1^1/_4$" -3 ಎಂ.ಎಂ. ದಪ್ಪದ ಎಂ. ಎಸ್. ಚಾನಲ್; ಎಲ್ ಆಂಗಲ್‌ನ್ನು ಪಾಲಿಹೌಸ್ ಪಕ್ಕಕ್ಕೆ ಅಳವಡಿಸಲು ನಕ್ಷೆಯಲ್ಲಿ ತೋರಿಸಿರುವ ಹಾಗೆ ಅಳವಡಿಸುವುದು.
6. ಐಪಿಸಿಎಲ್ ದರ್ಜೆಯ 800 ಗೇಜ್: 200 ಮೈಕ್ರಾನ್ ದಪ್ಪದ ಕ್ಷ-ಕಿರಣ ಹೊಂದಿರುವ ಬಿಳಿ ಪಾರದರ್ಶಕ ಪಾಲಿಥೀನ್ ಹಾಳೆಯನ್ನು ಪಾಲಿಹೌಸ್‌ಗೆ ಪೂರ್ಣವಾಗಿ ಹೊದಿಸಬೇಕು.
7. 2” ದಪ್ಪದ ಫೋಮ್ ಹಾಗೂ ಬೀಡಿಂಗ್- (ಸಿಲ್ವರ್ ಓಕ್ ಮರದ್ದು)
8. ಪಾಲಿಹೌಸ್‌ನ ಎಡ ಹಾಗೂ ಬಲಭಾಗದಲ್ಲಿ ಕೀಟಪರದೆ (ರ್‍ಯಾಂಬೋನೆಟ್ (40-60 ಜರಡಿ) ನಕ್ಷೆಯಲ್ಲಿ ತೋರಿಸಿರುವ ಹಾಗೆ ಅಳವಡಿಸಬೇಕು.
9. ಪಾಲಿಹೌಸ್ ಮುಂಭಾಗ ಹಾಗೂ ಹಿಂಭಾಗದಲ್ಲಿ 3X7 ಅಡಿ ಅಳತೆಯ ಕಬ್ಬಿಣದ ಬಾಗಿಲನ್ನು ಅಳವಡಿಸುವುದು ಹಾಗೂ ಸಿಲ್ವರ್ ಬಣ್ಣದಿಂದ ಎಂ.ಎಸ್. ಆಂಗಲ್ ಬಾಗಿಲುಗಳಿಗೆ ಬಣ್ಣ ಹಚ್ಚುವುದು.
10. ಸಾಗಾಣಿಕೆ ಮತ್ತು ಕಾಮಗಾರಿಗೆ ತಗಲುವ ವೆಚ್ಚ.

**ಸೂಚನೆ:** ಒಂದು ಚದರ ಮೀಟರ್‌ಗೆ ತಗಲುವ ವೆಚ್ಚವನ್ನು ನಮೂದಿಸಬೇಕು.

**2. ತೋಟಗಾರಿಕಾ ಕ್ಷೇತ್ರಗಳಲ್ಲಿ ನೆರಳು ಚಾವಣಿ: ಶೇಡ್‌ನೆಟ್ ಪೆಂಡಾಲ್ ನಿರ್ಮಾಣ ಮಾಡುವ ಸ್ಪಷ್ಟತೆಗಳು**

1. 2” ದಪ್ಪ (ಅಳತೆ) “ಎ” ದರ್ಜೆಯ ಐ.ಎಸ್.ಐ. ಮುದ್ರಣ ಜಿ.ಐ. ಪೈಪನ್ನು 2 ಅಡಿ ತಳಪಾಯಕ್ಕೆ ಹಾಕಿ ಸಿಮೆಂಟ್ ಕಾಂಕ್ರೀಟ್ ನಿಂದ ಮುಚ್ಚಬೇಕು.

2. $1^{1}/_{2}$" ದಪ್ಪ (ಅಳತೆ) "ಬಿ" ದರ್ಜೆಯ ಐ.ಎಸ್.ಐ ಮುದ್ರಣ ಉತ್ತಮ ಗುಣಮಟ್ಟದ ಜಿ.ಐ. ಪೈಪನ್ನು ನೆರಳು ಛಾವಣಿಯ 8 ಅಡಿ ಎತ್ತರದ ಕಂಬಕ್ಕೆ (ಹಾಗೂ ಮೇಲ್ಭಾಗದ ಫ್ರೇಂಗೆ) ನಕ್ಷೆಯಲ್ಲಿ ತೋರಿಸಿರುವ ಮಾದರಿಯಲ್ಲಿ ಉಪಯೋಗಿಸಿ ಅಳವಡಿಸಬೇಕು.
3. 1"ಅಳತೆ "ಎ" ದರ್ಜೆಯ ಐ.ಎಸ್.ಐ ಮುದ್ರಣ ಜಿ.ಐ. ಪೈಪನ್ನು ನಕ್ಷೆಯಲ್ಲಿ ತೋರಿಸಿರುವ ಹಾಗೆ ಚಪ್ಪರದ ಮೇಲುಭಾಗಕ್ಕೆ ಅಳವಡಿಸಬೇಕು.
4. 14 ಗೇಜ್ ದಪ್ಪದ ಜಿ.ಐ. ತಂತಿಯನ್ನು 4 ಅಡಿ ಅಂತರದಲ್ಲಿ (1/1/2 ಅಳತೆಯ ಜಿ.ಐ. ಪೈಪ್ ಫ್ರೇಂ ಮೇಲ್ಭಾಗದಲ್ಲಿ ಬಿಗಿದು ಎಳೆದು ಕಟ್ಟಬೇಕು) ಚಪ್ಪರದ ಮೇಲೆ ಹಾಗೂ ಕೆಳಗೆ ಅಡ್ಡ ಮತ್ತು ಉದ್ದವಾಗಿ ಎಳೆದು ಕಟ್ಟಬೇಕು.
5. ಉತ್ತಮ ಗುಣಮಟ್ಟದ ಶೇಕಡ 50 ರ ಶೇಡ್ ನೆಟ್‌ನ್ನು ಜಿ.ಐ. ಪೈಪ್ ಫ್ರೇಂ ಮೇಲೆ ಅಳವಡಿಸಿ ಸುತ್ತಲೂ ಒಂದು ಅಡಿ ಕೆಳಕ್ಕೆ ನಕ್ಷೆಯಲ್ಲಿ ತೋರಿಸಿರುವ ಹಾಗೆ ಕಟ್ಟಬೇಕು ಹಾಗೂ ಜಿ.ಐ ವೈರ್‌ನಿಂದ ಬಂಧಿಸಬೇಕು.
6. ಸಾಗಾಣಿಕೆ ಹಾಗೂ ಕಾಮಗಾರಿಗೆ ತಗಲುವ ವೆಚ್ಚ.

**ಸೂಚನೆ:** ಒಂದು ಚದರ ಮೀಟರ್‌ಗೆ ತಗಲುವ ವೆಚ್ಚವನ್ನು ನಮೂದಿಸಬೇಕು.

3. ಐಪಿಸಿಎಲ್ ದರ್ಜೆಯ 800 ಗೇಜ್: 2000 ಮೈಕ್ರಾನ್ ದಪ್ಪದ ಕ್ಷ-ಕಿರಣಗಳನ್ನು ತಡೆಯಲು ಶಕ್ತವುಳ್ಳ ಬಿಳಿಯ ಪಾಲಿಥೀನೆ ಶೀಟ್- ಒಂದು ಕೆ.ಜಿ.ಗೆ ಆಗುವ ದರವನ್ನು ನಮೂದಿಸಬೇಕು.
4. ಐಪಿಸಿಎಲ್ ದರ್ಜೆಯ 800 ಗೇಜ್: 200 ಮೈಕ್ರಾನ್ ದಪ್ಪದ ಕ್ಷ-ಕಿರಣಗಳನ್ನು ತಡೆಯಲು ಶಕ್ತವುಳ್ಳ ಕಪ್ಪು ಪಾಲಿಥಿನ್ ಶೀಟ್- ಒಂದು ಕೆ.ಜಿ.ಗೆ ಆಗುವ ದರವನ್ನು ನಮೂದಿಸಬೇಕು.
5. ಈಗಾಗಲೇ ಇರುವ ನೆರಳು ಚಪ್ಪರ: ಪೆಂಡಾಲ್‌ಗಳಿಗೆ ಉಪಯೋಗಿಸಲು ಬೇಕಾಗುವ ಶೇಕಡ 50 ರ ಉತ್ತಮ ದರ್ಜೆಯ ಶೇಡ್ ನೆಟ್ ಸರಬರಾಜಿಗಾಗಿ ಒಂದು ಚದರ ಮೀಟರ್‌ಗೆ ದರ ನಮೂದಿಸಬೇಕು.

ಪಿ.ಆರ್.545

ಹಿರಿಯ ಸಹಾಯಕ ತೋಟಗಾರಿಕೆ ನಿರ್ದೇಶಕರು, (ರಾಜ್ಯವಲಯ)
ಬೆಂಗಳೂರು ಗ್ರಾಮಾಂತರ ಜಿಲ್ಲೆ, ಕಬ್ಬನ್‌ಪಾರ್ಕ್, ಬೆಂಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರ ಕಛೇರಿಯ ಪ್ರಕಟಣೆ.**

**ಬಹಿರಂಗ ಹರಾಜು ಪ್ರಕಟಣೆ**

**ಸಂ: ಎ3-ಬಿಯುಡಿ-ಸಿಆರ್-18/04-05 ದಿನಾಂಕ: 24ನೇ ನವೆಂಬರ್ 2004**

**ವಿಷಯ :** ಮಾಗಡಿ ಅರಣ್ಯ ವಲಯದಲ್ಲಿ ನೀಲಗಿರಿ ಟಿಂಬರ್ ಲಾಗ್‌ಗಳ ಬಹಿರಂಗ ಹರಾಜು ಕುರಿತು.

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಸಾರ್ವಜನಿಕರಿಗೆ ಈ ಮೂಲಕ ತಿಳಿಯಪಡಿಸುವುದೇನೆಂದರೆ ಬೆಂಗಳೂರು ಗ್ರಾಮಾಂತರ ಅರಣ್ಯ ವಿಭಾಗದ ಮಾಗಡಿ ಅರಣ್ಯ ವಲಯದ ನೆಡುತೋಪಿನಲ್ಲಿ ಕತ್ತಾವಣೆ ಮಾಡಿದ ನೀಲಗಿರಿ ಮರಗಳಿಂದ ಲಭ್ಯವಾದ ಟಿಂಬರನ್ನು ವಲಯ ಅರಣ್ಯಾಧಿಕಾರಿಗಳ ಕಛೇರಿ ಆವರಣದಲ್ಲಿ ಲಾಟು ಮಾಡಿದ್ದು ಇವುಗಳನ್ನು ಬಹಿರಂಗ ಹರಾಜು ಮೂಲಕ ದಿನಾಂಕ: 03.01.2005 ರಂದು ಬೆಳಿಗ್ಗೆ 11.30 ಗಂಟೆಗೆ ಮಾಗಡಿ ಪ್ರಾದೇಶಿಕ ಅರಣ್ಯ ವಲಯ ಕಛೇರಿ ಆವರಣದಲ್ಲಿ ಕೆಳಸಹಿದಾರರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕೃತ ಅಧಿಕಾರಿಯು ಕೆಳಕಂಡ ಷರತ್ತುಗಳ ಮೇಲೆ ಬಹಿರಂಗ ಹರಾಜನ್ನು ಮಾಡಲು ಉದ್ದೇಶಿಸಿ ಪ್ರಕಟಣೆ ಹೊರಡಿಸಲಾಗಿದೆ.

1. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಸುವವರು 5,000.00 ರೂಗಳ ಇ.ಎಂ.ಡಿ (ಠೇವಣಿ)ಯನ್ನು ಬಹಿರಂಗ ಹರಾಜಿಗೆ ಒಂದು ಗಂಟೆ ಮುಂಚೆ ಪಾವತಿಸಬೇಕು.
2. ಹರಾಜಿನಲ್ಲಿ ಭಾಗವಹಿಸುವ ಮೊದಲು ಷೆಡ್ಯೂಲಿನಲ್ಲಿ ನಮೂದಿಸಿರುವ ಇಡುಗಂಟನ್ನು (ಇ.ಎಂ.ಡಿ) ನಗದು ರೂಪದಲ್ಲಿ ಪಾವತಿಸತಕ್ಕದ್ದು.
3. ಷೆಡ್ಯೂಲ್‌ನಲ್ಲಿ ಸೂಚಿಸಿರುವ ನಿಗದಿತ ಸಮಯ ಮತ್ತು ದಿನಾಂಕದಂದು ಬಹಿರಂಗ ಹರಾಜನ್ನು ನಡೆಸಲಾಗುವುದು.
4. ಇಡುಗಂಟನ್ನು ಜಮಾ ಮಾಡದೇ ಬಿಡ್‌ದಾರರು ಹರಾಜಿನಲ್ಲಿ ಭಾಗವಹಿಸುವ ಹಕ್ಕು ಇರುವುದಿಲ್ಲ.
5. ಷೆಡ್ಯೂಲ್‌ನಲ್ಲಿ ಸೂಚಿಸಿರುವ ಮತ್ತು ಕತ್ತಾವಣೆ ಮಾಡಿ ಲಾಟ್ ಮಾಡಿರುವ ನೀಲಗಿರಿ ಮರಗಳ ಲಾಗ್‌ಗಳನ್ನು ಪರಿಶೀಲಿಸಿ ಖಚಿತಪಡಿಸಿಕೊಂಡ ನಂತರ ಹರಾಜಿನಲ್ಲಿ ಭಾಗವಹಿಸಬೇಕು.
6. ಷೆಡ್ಯೂಲ್‌ನಲ್ಲಿ ತೋರಿಸಿರುವ ಪ್ರತಿ ಲಾಟ್‌ಗೆ ಪ್ರತ್ಯೇಕ ಹರಾಜು ಮಾಡಲಾಗುವುದು.
7. ಯಶಸ್ವಿ ಬಿಡ್‌ದಾರರು ತಮ್ಮ ಸ್ವಂತ ಖರ್ಚಿನಲ್ಲಿ ವಿಲೇವಾರಿ ಮಾಡಿಕೊಳ್ಳತಕ್ಕದ್ದು.
8. ಟಿಂಬರ್ ಲಾಗ್‌ಗಳನ್ನು ಸಾಗಿಸಲು ಪರವಾನಗಿಯನ್ನು ನೀಡಲಾಗುವುದು. ಪರವಾನಗಿ ಶುಲ್ಕವನ್ನು ಯಶಸ್ವಿ ಬಿಡ್‌ದಾರರು ವಲಯ ಅರಣ್ಯಾಧಿಕಾರಿ, ಮಾಗಡಿ ರವರಲ್ಲಿ ಜಮಾ ಮಾಡತಕ್ಕದ್ದು.
9. ಹರಾಜಿನಲ್ಲಿ ಯಶಸ್ವಿಯಾದ ಬಿಡ್‌ದಾರರು ಹರಾಜಿನ ದಿನದಂದೇ ತಾವು ಸೂಚಿಸಿದ ಹರಾಜಿನ ಮೊತ್ತದ ಶೇಕಡ 50 ರಷ್ಟು ಹಣವನ್ನು ಹಾಗೂ ಸೂಚಿಸಿದ ಮೊತ್ತಕ್ಕೆ ಅನ್ವಯಿಸುವ ಪೂರ್ತಿ ತೆರಿಗೆಯನ್ನು ಜಮಾ ಮಾಡತಕ್ಕದ್ದು. ತಪ್ಪಿದಲ್ಲಿ ಇ.ಎಂ.ಡಿ. ಮೊತ್ತವನ್ನು ಮುಟ್ಟುಗೋಲು ಹಾಕಿಕೊಂಡು 2ನೇ ಬಿಡ್‌ದಾರರು ಯಶಸ್ವಿ ಬಿಡ್ಡುದಾರರೆಂದು ಪರಿಗಣಿಸಲಾಗುವುದು.
10. ಬಿಡ್‌ದಾರರು ಈ ಕಛೇರಿಯಿಂದ ಕಾರ್ಯಾದೇಶ ಪಡೆದ 3 ದಿನಗಳೊಳಗಾಗಿ ಟಿಂಬರ್ ಲಾಗ್‌ಗಳನ್ನು ತೆಗೆದುಕೊಂಡು ಹೋಗತಕ್ಕದ್ದು.
11. ಯಶಸ್ವಿ ಬಿಡ್‌ದಾರರಿಗೆ ಆಗುವ ಲಾಭ ಅಥವಾ ನಷ್ಟಗಳಿಗೆ ಇಲಾಖೆ ಜವಾಬ್ದಾರಿಯಲ್ಲ.
12. ಬಹಿರಂಗ ಹರಾಜಿನಲ್ಲಿ ಉದ್ಭವಿಸಬಹುದಾದ ತಂಟೆತಕರಾರುಗಳಿಗೆ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು ರವರು ನೀಡುವ ತೀರ್ಮಾನವೇ ಅಂತಿಮವಾಗಿರುತ್ತದೆ.
13. ಕಪ್ಪು ಪಟ್ಟಿಯಲ್ಲಿರುವ ಬಿಡ್‌ದಾರರು ಅಥವಾ ದಿವಾಳಿಯಾಗಿರುವವರು ಈ ಹರಾಜಿನಲ್ಲಿ ಭಾಗವಹಿಸಲು ಅರ್ಹರಿರುವುದಿಲ್ಲ.
14. ಹರಾಜಿನ ನಂತರ ಬರುವ ಬೆಲೆಗಳನ್ನು ಯಾವುದೇ ಕಾರಣಕ್ಕೂ ಪರಿಗಣಿಸಲಾಗುವುದಿಲ್ಲ.
15. ಯಾವುದೇ ತಂಟೆ ತಕರಾರುಗಳಿದ್ದಲ್ಲಿ ಹರಾಜು ಪ್ರಾರಂಭಿಸುವ ಎರಡು ಗಂಟೆ ಮುಂಚಿತವಾಗಿ ಸಂಬಂಧಿಸಿದ ಅಧಿಕಾರಿಗಳ ಗಮನಕ್ಕೆ ಲಿಖಿತ ಮೂಲಕ ತರತಕ್ಕದ್ದು ಹಾಗೂ ಹರಾಜಿನ ನಂತರ ತಡವಾಗಿ ಬರುವ ಯಾವುದೇ ತರಹದ ದೂರುಗಳನ್ನು ಗಣನೆಗೆ ತೆಗೆದುಕೊಳ್ಳುವುದಿಲ್ಲ.
16. ಯಶಸ್ವಿ ಬಿಡ್‌ದಾರರು ತಮ್ಮ ಬಿಡ್ಡಿನ ಬೆಲೆಯ ಮೇಲೆ ಮಾರಾಟ ತೆರಿಗೆ 14% ಮಾರಾಟ ತೆರಿಗೆಯ ಮೇಲೆ ಸರ್ಚಾರ್ಜ್ 15% ಅರಣ್ಯ ಅಭಿವೃದ್ಧಿ ತೆರಿಗೆ 12% ಆದಾಯ ತೆರಿಗೆ 15% ಮತ್ತು ಆದಾಯ ತೆರಿಗೆ ಮೇಲೆ ಸೆಸ್ 5% ರಷ್ಟು ಪಾವತಿಸಬೇಕು.

17. ಯಶಸ್ವಿ ಬಿಡ್‌ದಾರರು ನಿಗದಿತ ಅವಧಿಯಲ್ಲಿ ಟಿಂಬರ್ ಸಾಗಿಸದ ಪಕ್ಷದಲ್ಲಿ ಇ.ಎಂ.ಡಿ. ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದಲ್ಲದೆ ಬಿಡ್‌ದಾರರ ಜವಾಬ್ದಾರಿ ಮೇರೆಗೆ ಟಿಂಬರನ್ನು ಮರು ಹರಾಜು ಮಾಡಲಾಗುವುದು. ಮರು ಹರಾಜಿನಲ್ಲಿ ಕಡಿಮೆ ಬಿಡ್ ಬಂದು ಸರ್ಕಾರಕ್ಕೆ ನಷ್ಟವಾದಲ್ಲಿ 1963 ಅರಣ್ಯ ಕಾಯ್ದೆ ಸೆಕ್ಷನ್ 109 ರಂತೆ ಬಾಕಿಯನ್ನು ಭೂಕಂದಾಯ ರೂಪದಲ್ಲಿ ವಸೂಲಿ ಮಾಡಲಾಗುವುದು ಅಥವಾ ಸರಕು ಸಾಮಗ್ರಿಗಳ ಮಾರಾಟದ ಕಾನೂನಿನ್ವಯ ಅಥವಾ ಸಿವಿಲ್ ಪ್ರೊಸೀಜರ್ ಕೋಡ್ ಅನ್ವಯ ಕ್ರಮ ಕೈಗೊಳ್ಳಲಾಗುವುದು.

ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು**

**ಷೆಡ್ಯೂಲ್**

| ಲಾಟು ಸಂ. | ವಿವರಗಳು (ನೀಲಗಿರಿ ಟಿಂಬರ್ ಲಾಗ್‌ಗಳು) | ಅಂದಾಜು ಪ್ರಮಾಣ ಘ.ಮೀ.ಗಳಲ್ಲಿ | ಮಾರಾಟದ ದಿನಾಂಕ | ಕಟ್ಟಬೇಕಾದ ಇಎಂಡಿ (ಪ್ರತಿ ಲಾಟಿಗೆ) |
|---|---|---|---|---|
| 1 | 2 | 3 | 4 | 5 |
| 1 | 12 ತುಂಡುಗಳು | 5.601 $M^3$ | 03.01.05 ಬೆಳಿಗ್ಗೆ 11.30 ಗಂಟೆಗೆ | 5,000.00 |
| 2 | 12 ತುಂಡುಗಳು | 5.002 $M^3$ | | |
| 3 | 9 ತುಂಡುಗಳು | 3.010 $M^3$ | | |
| 4 | 18 ತುಂಡುಗಳು | 5.644 $M^3$ | | |
| 5 | 26 ತುಂಡುಗಳು | 8.686 $M^3$ | | |
| 6 | 16 ತುಂಡುಗಳು | 6.249 $M^3$ | | |
| 7 | 14 ತುಂಡುಗಳು | 5.715 $M^3$ | | |
| 8 | 14 ತುಂಡುಗಳು | 5.865 $M^3$ | | |
| 9 | 16 ತುಂಡುಗಳು | 5.681 $M^3$ | | |
| 10 | 13 ತುಂಡುಗಳು | 2.888 $M^3$ | | |
| 11 | 11 ತುಂಡುಗಳು | 3.023 $M^3$ | | |
| 12 | 17 ತುಂಡುಗಳು | 6.830 $M^3$ | | |
| 13 | 13 ತುಂಡುಗಳು | 3.488 $M^3$ | | |
| 14 | 14 ತುಂಡುಗಳು | 4.412 $M^3$ | | |
| 15 | 22 ತುಂಡುಗಳು | 6.501 $M^3$ | | |
| 16 | 4 ತುಂಡುಗಳು | 1.613 $M^3$ | | |
| 17 | 9 ತುಂಡುಗಳು | 3.756 $M^3$ | | |
| 18 | 8 ತುಂಡುಗಳು | 4.054 $M^3$ | | |
| 19 | 15 ತುಂಡುಗಳು | 7.356 $M^3$ | | |
| 20 | 5 ತುಂಡುಗಳು | 2.219 $M^3$ | | |
| 21 | 6 ತುಂಡುಗಳು | 3.559 $M^3$ | | |
| 22 | 5 ತುಂಡುಗಳು | 3.234 $M^3$ | | |
| 23 | 3 ತುಂಡುಗಳು | 2.782 $M^3$ | | |
| 24 | 5 ತುಂಡುಗಳು | 2.552 $M^3$ | | |
| 25 | 7 ತುಂಡುಗಳು | 4.957 $M^3$ | | |
| 26 | 7 ತುಂಡುಗಳು | 3.433 $M^3$ | | |
| | **Total** | **118.110 $M^3$** | | |

ಪಿ.ಆರ್.535

ಉಪ ಅರಣ್ಯ ಸಂರಕ್ಷಣಾಧಿಕಾರಿ,
ಬೆಂಗಳೂರು ಗ್ರಾಮಾಂತರ ವಿಭಾಗ, ಬೆಂಗಳೂರು.

**ಉಪ ಅರಣ್ಯ ಸಂರಕ್ಷಣಾಧಿಕಾರಿಯವರ ಕಛೇರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು-03**

**ಟೆಂಡರ್ ಮತ್ತು ಹರಾಜು ಮಾರಾಟ ಪ್ರಕಟಣೆ**

**ಸಂಖ್ಯೆ: ಎ5:ವಾಹನ:ವಿಲೆ:ಜಿಎಲ್:04-05 ದಿನಾಂಕ: 16ನೇ ನವೆಂಬರ್ 2004**

ಈ ಮೂಲಕ ಸಮಸ್ತ ಜನರಿಗೆ ತಿಳಿಯಪಡಿಸುವುದೇನೆಂದರೆ ಇಲಾಖೆಯಲ್ಲಿರುವ ಈ ಕೆಳಕಂಡ ವಾಹನಗಳನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಯವರು ನಿರುಪಯುಕ್ತ ವಾಹನಗಳೆಂದು ದೃಢೀಕರಣ ನೀಡಿರುವುದರಿಂದ ಇವುಗಳನ್ನು ದಿನಾಂಕ: 28.12.2004 ರಂದು ಅಪರಾಹ್ನ 3.00 ಗಂಟೆಗೆ ಸರಿಯಾಗಿ ಅರಣ್ಯ ಭವನದ ಸಂಕೀರ್ಣದಲ್ಲಿ ವಾಹನ ಹೇಗಿದೆಯೋ ಹಾಗೆ ಇರುವ ಸ್ಥಿತಿಯಲ್ಲಿಯೇ ಉಪ ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ನಗರ ವಿಭಾಗ, ಬೆಂಗಳೂರು ರವರು ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳು ಟೆಂಡರ್ ಕಂ ಹರಾಜು ಮೂಲಕ ಮಾರಾಟ ಮಾಡುತ್ತಾರೆ. ಇಷ್ಟವುಳ್ಳ ಬಿಡ್ಡುದಾರರು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಟೆಂಡರ್ ಕಂ ಹರಾಜಿನಲ್ಲಿ ಪಾಲ್ಗೊಳ್ಳಬಹುದು. 28.12.2004 ರಂದು ಹರಾಜು ನಡೆಯದಿದ್ದಲ್ಲಿ ಕ್ರಮವಾಗಿ 31.12.2004 ರಂದು ಇದೇ ಸ್ಥಳದಲ್ಲಿ ನಡೆಸಲಾಗುವುದು.

| ಕ್ರಮ ಸಂಖ್ಯೆ | ವಾಹನಗಳ ವಿವರ | | ಹರಾಜಿನ ದಿನಾಂಕ |
|---|---|---|---|
| 1 | ಕೆಎ-01-ಜಿ-2403 ಕಾರು | Model-1996 | 28.12.2004 |
| 2 | ಕೆಎ-15-ಜಿ-93 ಮಾರುತಿ ವ್ಯಾನ್ | 17.06.1998 ರಂದು ಅರಣ್ಯ ಮೊಕದ್ದಮೆಯಲ್ಲಿ ಮುಟ್ಟುಗೋಲು ಹಾಕಿಕೊಂಡಿರುವ ವಾಹನ | -"- |
| 3 | ಕೆಎ-01-ಜಿ-1883 ಅಂಬಾಸಿಡರ್ ಕಾರು | Model-1995 | -"- |
| 4 | ಕೆಎ-01-ಜಿ-1444 ಮಾರುತಿವ್ಯಾನ್ | Model-1994 | -"- |

**ನಿಯಮಗಳು:**

1. ಟೆಂಡರ್‌ನಲ್ಲಿ ಭಾಗವಹಿಸುವ ಪ್ರತಿಯೊಬ್ಬ ಅರ್ಜಿದಾರರು ನಿಗದಿತ ನಮೂನೆಯ ಟೆಂಡರ್ ಫಾರಂಗಳನ್ನು ರೂ. 12.00 ಪಾವತಿಸಿ ಪಡೆಯುವುದು. ಪ್ರತಿ ಟೆಂಡರ್‌ಗೆ ರೂ. 3000 ಗಳನ್ನು ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ (ಹೆಸರಿಗೆ) ಪದನಾಮಕ್ಕೆ ಡಿ.ಡಿ. ತೆಗೆದು ಟೆಂಡರ್ ಜೊತೆಯಲ್ಲಿ ಲಗತ್ತಿಸಿ ಅಥವಾ ಹರಾಜಿಗೆ ಹಾಜರಾಗುವ ಮುನ್ನ ರೂ. 3000 ಗಳನ್ನು ಇ.ಎಂ.ಡಿ. ಮೂಲಕ ಕಟ್ಟಿ ಭಾಗವಹಿಸುವುದು.
2. ಹರಾಜಿನಲ್ಲಿ ಭಾಗವಹಿಸಲು ಇಚ್ಛಿಯುಳ್ಳವರು ಹರಾಜು ಪ್ರಾರಂಭವಾಗುವ ಮುನ್ನ ಕಛೇರಿಯ ವೇಳೆಯಲ್ಲಿ ವಾಹನ ಇರುವ ಸ್ಥಳದಲ್ಲಿ ವಾಹನವನ್ನು ಪರೀಕ್ಷಿಸಿ ಸ್ಥಿತಿಗತಿಯನ್ನು ತಪಾಸಣೆ ಮಾಡಿಕೊಂಡು ಖಾತ್ರಿ ಮಾಡಿಕೊಳ್ಳತಕ್ಕದ್ದು. ಹರಾಜು ಮುಗಿದ ನಂತರ ಯಾವ ದೂರನ್ನು ಪರಿಗಣಿಸುವುದಿಲ್ಲ.
3. ಯಶಸ್ವಿಯಾದ ಬಿಡ್ಡುದಾರರು ಹರಾಜು ಮುಗಿದ ತಕ್ಷಣ ಹರಾಜಿನ ಮೊತ್ತದ 1/2 ಭಾಗ (ಠೇವಣಿ ಹಣವು ಸೇರಿದಂತೆ) ಮತ್ತು ಚಾಲ್ತಿಯಲ್ಲಿರುವ ಎಲ್ಲಾ ತೆರಿಗೆಗಳ ಸಹಿತ (ಎಫ್‌ಡಿಟಿ ಶೇ. 8% ಮತ್ತು ಎಸ್‌ಟಿ 15%) ಹಣವನ್ನು ಪಾವತಿಸಿ ರಶೀದಿಯನ್ನು ಪಡೆದುಕೊಳ್ಳತಕ್ಕದ್ದು ತಪ್ಪಿದಲ್ಲಿ ಠೇವಣಿ ಹಣವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿ ಮೂಲ ಬಿಡ್ಡುದಾರರ ಸ್ವಂತ ಖರ್ಚು ಮತ್ತು ಜವಾಬ್ದಾರಿಯ ಮೇರೆಗೆ ಮರು ಹರಾಜು ಮಾಡಲಾಗುವುದು. ತಪ್ಪಿತಸ್ಥರು ಮರು ಹರಾಜಿನಲ್ಲಿ ಆದಂತಹ ನಷ್ಟ ತುಂಬಿಕೊಡಲು ಜವಾಬ್ದಾರರಾಗಿರುತ್ತಾರೆ. ತಪ್ಪಿದಲ್ಲಿ ಈ ನಷ್ಟವನ್ನು ಮೂಲ ಬಿಡ್ಡುದಾರರಿಂದ ಅರಣ್ಯ ಕಾಯ್ದೆ 1969 ಅಧಿನಿಯಮ 109ರ ಪ್ರಕಾರ ಕಂದಾಯ ಬಾಕಿ ಎಂದು ಪರಿಗಣಿಸಿ ವಸೂಲಿ ಮಾಡಲಾಗುವುದು.
4. ಸಂಬಂಧಪಟ್ಟ ಅಧಿಕಾರಿಗಳಿಂದ ಬಿಡ್ಡು ಅಂಗೀಕಾರವಾದ ನಂತರ ಯಶಸ್ವಿ ಬಿಡ್ಡುದಾರರ ಹೆಸರಿಗೆ ನೋಂದಣಿ ಅಂಚೆ/ಸ್ವೀಕೃತಿ ಪತ್ರದ ಮೂಲಕ ತಿಳಿಸಲಾಗುವುದು. ಈ ತಿಳುವಳಿಕೆಯನ್ನು ಹರಾಜು ನಡೆದ ದಿನದಿಂದ 60 ದಿನಗಳ ಒಳಗಾಗಿ ಯಶಸ್ವಿ ಬಿಡ್ಡುದಾರರಿಗೆ/ ಟೆಂಡರ್‌ದಾರರಿಗೆ ತಿಳಿಸಲಾಗುವುದು. ಯಶಸ್ವಿ ಬಿಡ್ಡುದಾರರು: ಟೆಂಡರ್‌ದಾರರು ಉಳಿದ ಮುಕ್ಕಾಲು ಭಾಗ ಹರಾಜಿನ ಮೊತ್ತದ ಹಣವನ್ನು ಸ್ವೀಕೃತಿ ಅರ್ಜಿಯ ಪ್ರತಿ ತಲುಪಿದ 15 ದಿನಗಳ ಒಳಗೇ ಕಟ್ಟಿ ವಾಹನವನ್ನು ಬಿಡಿಸಿಕೊಳ್ಳುವುದು. ತಪ್ಪಿದಲ್ಲಿ ನಿಬಂಧನೆಯ ಸಂಖ್ಯೆ 3ರ ಪ್ರಕಾರ ಕ್ರಮವನ್ನು ತೆಗೆದುಕೊಳ್ಳಲಾಗುವುದು.
5. ಹರಾಜನ್ನು ಸ್ವೀಕರಿಸುವ ಅಥವಾ ತಿರಸ್ಕರಿಸುವ ಹಕ್ಕು ಸಂಬಂಧಪಟ್ಟ ಉಪ ಅರಣ್ಯ ಸಂರಕ್ಷಣಾಧಿಕಾರಿಯವರಿಗೆ ಇರುತ್ತದೆ. ಯಾವುದೇ ಕಾರಣವನ್ನು ನೀಡದೆ ಸಂಬಂಧಿಸಿದ ಅಧಿಕಾರಿಗಳು ಹರಾಜನ್ನು ತಿರಸ್ಕರಿಸಬಹುದಾಗಿರುತ್ತದೆ.
6. ಯಶಸ್ವಿ ಬಿಡ್ಡುದಾರರಿಗೆ ತೀವ್ರ ಕಷ್ಟದ ಪರಿಸ್ಥಿತಿಯಲ್ಲಿ ವಾಹನದ ಬಾಕಿ ಮೊತ್ತ ಪಾವತಿಸಲು ಅರಣ್ಯ ಸಂರಕ್ಷಣಾಧಿಕಾರಿಗಳು, ಬೆಂಗಳೂರು ವೃತ್ತ, ಬೆಂಗಳೂರು ಅಥವಾ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರು ಬಾಕಿ ಮೊತ್ತ ಅದರ ಮೇಲಿನ ಬಡ್ಡಿ ಹಾಗೂ ನೆಲಬಾಡಿಗೆಯನ್ನು ವಿಧಿಸಿ, ಅವಧಿ ವಿಸ್ತರಣೆ ನೀಡಲು ಅಧಿಕಾರವುಳ್ಳವರಾಗಿರುತ್ತಾರೆ.
7. ಸದರಿ ವಾಹನದ ಮೇಲೆ ಬೇರೆ ಯಾವುದೇ ಹಣ ಬಾಕಿ ಇದ್ದಲ್ಲಿ ಸದರಿ ಬಾಕಿ ತೀರುವಳಿ ಜವಾಬ್ದಾರಿ ಬಿಡ್ಡುದಾರರದಾಗಿರುತ್ತದೆ.
8. ಟೆಂಡರ್ ಫಾರಂಗಳನ್ನು ಈ ಕಛೇರಿಯ ವೇಳೆಯಲ್ಲಿ ನಿಗದಿತ ಶುಲ್ಕ ಹತ್ತು ರೂ. ಮತ್ತು ಚಾಲ್ತಿಯಲ್ಲಿರುವ ತೆರಿಗೆಗಳನ್ನು ಕಟ್ಟಿ ದಿನಾಂಕ: 24.12.2004 ರಿಂದ 28.12.2004 ರವರೆಗೆ ಮಧ್ಯಾಹ್ನ 12.00 ಗಂಟೆಯವರೆಗೆ ಪಡೆಯಬಹುದು.
9. ಟೆಂಡರ್‌ಗೆ ಸಂಬಂಧಿಸಿದ ದಾಖಲಾತಿಗಳು ಸೇರಿದಂತೆ ಮೊಹರು ಮಾಡಿದ ಕವರಿನಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು ಇವರ ಕಛೇರಿಯಲ್ಲಿ ಇಟ್ಟಿರುವ ಟೆಂಡರ್ ಪೆಟ್ಟಿಗೆಯಲ್ಲಿ ದಿನಾಂಕ: 28.12.2004 ರಂದು ಮಧ್ಯಾಹ್ನ 2.00 ಗಂಟೆಗೆ ಹಾಕುವುದು.
10. ಒಬ್ಬರು ಒಂದು ಟೆಂಡರ್‌ನ್ನು ಮಾತ್ರ ಹಾಕಬಹುದು. ಒಂದಕ್ಕಿಂತ ಹೆಚ್ಚು ಟೆಂಡರ್ ಹಾಕಿದಲ್ಲಿ ಹೆಚ್ಚು ಮೊತ್ತವನ್ನು ಒಳಗೊಂಡಿರುವ ಟೆಂಡರ್‌ನ್ನು ಮಾತ್ರ ಪರಿಗಣಿಸಿ ಮಿಕ್ಕ ಟೆಂಡರ್‌ಗಳನ್ನು ತಿರಸ್ಕೃತಗೊಳಿಸಲಾಗುವುದು.
11. ಟೆಂಡರ್ ಕವರಿನ ಮೇಲೆ ಕಾರಿನ ಸಂಖ್ಯೆ: ನಮೂದಿಸುವುದು ಮತ್ತು ಉಪ ಅರಣ್ಯ ಸಂರಕ್ಷಣಾಧಿಕಾರಿ, ನಗರ ವಿಭಾಗ, ಬೆಂಗಳೂರು ರವರ ಹೆಸರಿಗೆ ಟೆಂಡರ್ ಅರ್ಜಿಗಳನ್ನು ಸಲ್ಲಿಸಬೇಕು.
12. ಹರಾಜು ದಿನಾಂಕ: 28.12.2004 ರಂದು ಮಧ್ಯಾಹ್ನ 3.00 ಗಂಟೆಗೆ ಸರಿಯಾಗಿ ವಾಹನಗಳನ್ನು ದಾಸ್ತಾನು ಮಾಡಿರುವ ಸ್ಥಳ ಅರಣ್ಯ ಭವನದ ಸಂಕೀರ್ಣದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು.
13. ಈ ಮೇಲಿನ ದಿನಾಂಕದಂದು ಅನಿವಾರ್ಯ ಕಾರಣಗಳಿಂದ ಹರಾಜು ನಿಂತಲ್ಲಿ ದಿನಾಂಕ: 31.12.2004 ರಂದು ಮಧ್ಯಾಹ್ನ 3.00 ಗಂಟೆಗೆ ಅರಣ್ಯ ಭವನದ ಸಂಕೀರ್ಣದಲ್ಲಿ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅಥವಾ ಇವರಿಂದ ಅಧಿಕಾರ ಪಡೆದ ಅಧಿಕಾರಿಗಳಿಂದ ಹರಾಜು ನಡೆಸಲಾಗುವುದು.
14. ಟೆಂಡರ್‌ಗಳನ್ನು ಹರಾಜಿನ ನಂತರ ಹಾಜರಿರುವ ಟೆಂಡರ್‌ದಾರರು, ಬಿಡ್ಡುದಾರರ ಸಮ್ಮುಖದಲ್ಲಿ ತೆರೆಯಲಾಗುವುದು.
15. ಹರಾಜು ನಡೆಯುವ ದಿನ ಅಥವಾ ಟೆಂಡರ್ ಫಾರಂ ಪಡೆಯಲು ನಿಗದಿಪಡಿಸಿರುವ ದಿನಾಂಕದಂದು ಸಾರ್ವತ್ರಿಕ ರಜೆಯಾದ ಪಕ್ಷದಲ್ಲಿ ಸದರಿ ಹರಾಜನ್ನು ಮತ್ತು ಟೆಂಡರ್ ಪಡೆಯುವ ದಿನವನ್ನು ಮುಂದಿನ ಕಛೇರಿಯ ಕೆಲಸದ ದಿನದಂದು ಅದೇ ಸಮಯ ಮತ್ತು ಅದೇ ಸ್ಥಳದಲ್ಲಿ ನಡೆಸಲಾಗುವುದು.
16. ಟೆಂಡರ್‌ದಾರರು ಒಂದು ವಾಹನಕ್ಕೆ ಒಂದು ಟೆಂಡರ್ ಫಾರಂ ಮಾತ್ರ ಉಪಯೋಗಿಸತಕ್ಕದ್ದು.

17. ವಾಹನದ ಮಾಲೀಕತ್ವವನ್ನು ಬದಲಾಯಿಸಿಕೊಳ್ಳುವ ಹೊಣೆಯು ಯಶಸ್ವಿ ಬಿಡ್ಡುದಾರರದಾಗಿರುತ್ತದೆ. ಆದಾಗ್ಯೂ ಈ ವಿಚಾರದಲ್ಲಿ ಅವಶ್ಯವಿರುವ ಇಲಾಖೆಯ ಸಹಕಾರವನ್ನು ನೀಡಲಾಗುವುದು.

ಪಿ.ಆರ್.536 ಉಪ ಅರಣ್ಯ ಸಂರಕ್ಷಣಾಧಿಕಾರಿ, ಬೆಂಗಳೂರು ನಗರ ವಿಭಾಗ, ಬೆಂಗಳೂರು.

**PUBLIC WORKS DEPARTMENT**
**NATIONAL HIGHWAYS**
**OFFICE OF THE EXECUTIVE ENGINEER, NATIONAL HIGHWAYS SPECIAL DIVISION, BANGALORE**
**TENDER NOTIFICATION**
**No. EE/NH.Spl.Dn/JE-1/DBP/CRF/NIT-5/2004-05/1499 Dated 2nd November 2004**

Sealed Item Rate Tenders for the works noted below as per Karnataka Transparency in Public Procurement Act 2000 in prescribed form in duplicate is invited from the Class-I Contractors registered in KPWD/M.O.R.T & H approved Firms. The Bids shall be submitted in sealed cover duly superscribing name of the work and shall be addressed to the undersigned with name and full postal address of the bidder. Completed bids will be received at the office of the Executive Engineer, National Highway Special Division, Bangalore up to. 400 P.M. on 10.12.04, subject to the conditions laid down in form No. PWG 65, 66 of KPWD code Vol. II, Special Conditions contained in the schedules and in Karnataka Transparency in Public Procurement Act 2000. The Bids will be opened by the undersigned on the dates noted below. If any one of the dates below happens to be a general holiday, the next convenient day will be intimated.

| Sl. No. | Name of work | Length in Km. | Amount put to Tender (Rs. in lakhs) | EMD in Rs. | Cost of Tender Forms Non refundable | Nature of Work | Time for completion of work (Excluding Monsoon) |
|---|---|---|---|---|---|---|---|
| 1. | Improvements to Chikkaballapura-Nandihills in selected reaches (CRF-381-KNT-2004) | 5 | 37.99 | 38000/- | 10,000/- (+9% KST +15% Cess on KST) | WBM SDBC | 3 Months |
| 2. | Special Repairs from Km. 50.00 to Km.51.00 of NH-206 Tumkur Honnavar Section (Job No. TA.206- KNT-2004-299) | 1 | 7.22 | 8000/- | 5000/- (+9% KST +15% Cess on KST) | SDBC | 1 Month |

**GENERAL CONDITIONS:**

1. The contractors interested in bidding for the work may submit an application to the undersigned along with cost of tender documents (non-refundable) to be paid in the form of DD drawn in favour of Executive Engineer, N.H. Special Division, Bangalore payable at Bangalore along with application. The applicants should submit proof of registration and Karnataka Sales Tax Clearance certificate obtained from the concerned Departments while submitting the applications for tender schedules, otherwise the applications will not be considered.
   The Schedule of dates is as under:-
   a. Last date for receipt of Application : 06.12.04 Up to 5.00 P.M.
   b. Issue of Blank Tender Schedules : 08.12.04 Up to 5.30 P.M.
   c. Last date for submission of Bid : 10.12.04 Up to 4.00 P.M.
   d. Opening of bid : 10.12.04 at 4.30 P.M.

**CONDITIONS FOR BIDS:**

1. The EMD in the form of DD/FDR/Pay Order/Bank Guarantee drawn from a Nationalised or Scheduled Bank or NSC (Pledged in favour of undersigned only) shall be enclosed with the bid. The EMD pledged in favour of any other authority than the undersigned will be disqualified without entertaining any enquiries/ clarifications. The Bank Guarantee shall be strictly as specified in PWG 66 supplied with the tender form.
2. Each tenderer shall own following machinery and enclose with the bid evidence of ownership, as detailed under. The bids submitted without the evidence of ownership as detailed are liable for disqualification.

| Sl.No. | Machinery | Numbers | Evidence of ownership to be furnished |
|---|---|---|---|
| | **For Road Works:** | | |
| i) | Hot mix plant 40/60 TPH or Higher capacity (as per MORT&H specification) | One | Copy of Purchase invoice/Sale deed with a copy of purchase Invoice from the seller. |
| ii) | Paver Finisher Mechanical | One | -do- |

| Sl.No. | Machinery | Numbers | Evidence of ownership to be furnished |
|---|---|---|---|
| iii) | Static Road Roller | Two | Copy of Purchase invoice/Sale deed with a copy of purchase Invoice from the seller. |
| iv) | Vibratory Roller | One | -do- |
| v) | Mechanical Sprayer | Two | -do- |
| vi) | Tipper | Four | Copy of RC, FC, TC permit from RTO |

3. Each Tenderer should have individually satisfactorily completed single work of similar nature of value not less than 30% of the value of work in this Notification (up dated at 10% per annum compoundable) in any one financial year during a block period of previous five financial years. Alternatively, the contractor should have completed a billing of 30% of the value of work in this notification, during the current financial year for similar nature of work. The experience certificate in this regard should invariably have a mention of nature/items of work executed; otherwise the bid is liable for disqualification.
4. Tendering by joint venture is not allowed.
5. Tenderer who has purchased the blank tender schedules and not submitted the sealed tenders for the previous works in this division are not eligible for this tender.
6. The competent Authority reserves the right to reject any or all the tenders without assigning any reasons thereof.
7. Conditional tenders will not be accepted.

Any other details regarding the work, can be obtained from the above office during the office hours.

PR-537 Executive Engineer, NH Special Division, Bangalore.

**ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಕಛೇರಿ, ಕರ್ನಾಟಕ ರಾಜ್ಯ, ಬೆಂಗಳೂರು-560 001**

**ಟೆಂಡರ್ ಪ್ರಕಟಣೆ ಸಂಖ್ಯೆ: ಸಂಗ್ರಹ-2(4)93/2003-04 ದಿನಾಂಕ: 20ನೇ ನವೆಂಬರ್ 2004**

ಪೊಲೀಸ್ ಇಲಾಖೆಗೆ ಅಗತ್ಯವಿರುವ ಈ ಕೆಳಕಂಡ ಉಪಕರಣಗಳನ್ನು ಸರಬರಾಜು ಮಾಡಲು ಮೊಹರು ಮಾಡಿರುವ ದರಪಟ್ಟಿಗಳನ್ನು ಆಹ್ವಾನಿಸಲಾಗಿದೆ.

| Sl.No. | Name of the Equipment | Required Quantity |
|---|---|---|
| 1. | Smoke Pollution Monitoring Equipments for Petrol Vehicles | 15 Nos |
| 2. | Smoke Pollution Monitoring Equipments for Diesel Vehicles | 15 Nos |

**ಸೂಚನೆ:** ತಯಾರಿಕಾ ಘಟಕ/ರೆಪ್ಯೂಟೆಡ್ ಏಜೆಂಟ್ ಮತ್ತು ರೆಪ್ಯೂಟೆಡ್ ಕಂಪನಿಗಳಿಗೆ ಆದ್ಯತೆ ನೀಡಲಾಗುವುದು.

ಟೆಂಡರ್ ಅರ್ಜಿಗಳನ್ನು ಹಾಗೂ ಪ್ರತಿಯೊಂದು ಉಪಕರಣದ ನಿರ್ದಿಷ್ಟತೆ/ವಿಶಿಷ್ಟತೆಯ ಮೂಲಕ (Specification) ದಿನಾಂಕ:25.11.2004 ರಿಂದ 15.12.2004 ರವರೆಗೆ ಕೆಲಸಗಳ ದಿನದಂದು ಬೆಳಿಗ್ಗೆ 10.00 ಗಂಟೆಯಿಂದ ಸಾಯಂಕಾಲ 4.00 ಗಂಟೆಯೊಳಗೆ ಈ ಕಛೇರಿಯಲ್ಲಿ ಪಡೆಯಬಹುದು. ಪ್ರತಿ ಟೆಂಡರ್ ಅರ್ಜಿ ನಮೂನೆಯ ಬೆಲೆ ರೂ.200/-ಗಳನ್ನು ನಗದು ಅಥವಾ ಡಿ.ಡಿ. ಮೂಲಕ ಮಾತ್ರ ಪಾವತಿಸಬಹುದಾಗಿದೆ. (ಮನಿಯಾರ್ಡರ್‌ನಲ್ಲಿ ಪಾವತಿಸಿದರೆ ತಿರಸ್ಕರಿಸಲಾಗುವುದು) ಟೆಂಡರ್ ಅರ್ಜಿಯನ್ನು ಅಂಚೆ ಮೂಲಕ ಪಡೆಯಲು ಇಚ್ಛಿಸುವವರು ರೂ.200/-ಗಳಿಗೆ ಡಿ.ಡಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಬೆಂಗಳೂರು ರವರ ಹೆಸರಿನಲ್ಲಿ ಪಡೆದು ಕಳುಹಿಸಲು ಕೋರಲಾಗಿದೆ. ಹಾಗೂ ಸ್ವವಿಳಾಸ ಹೊಂದಿದ ಲಕೋಟೆಯ ಮೇಲೆ ರೂ.30/-ಗಳ ಅಂಚೆ ಚೀಟಿಯನ್ನು ಲಗತ್ತಿಸಿ ಕಳುಹಿಸಲು ಕೋರಿದೆ.

ಭರ್ತಿಮಾಡಿದ ಟೆಂಡರ್ ಅರ್ಜಿ ನಮೂನೆಗಳನ್ನು ಹಾಗೂ ಶೇಕಡ 2ರಷ್ಟು ಇ.ಎಂ.ಡಿ.ಯನ್ನು ಪ್ರತಿ ಉಪಕರಣದ ಮೌಲ್ಯಕ್ಕೆ ಮುಂಗಡ ಠೇವಣಿಯನ್ನು ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಕರ್ನಾಟಕ ರಾಜ್ಯ, ಬೆಂಗಳೂರು ರವರ ಹೆಸರಿನಲ್ಲಿ ಪಡೆದ ಡಿ.ಡಿ. ಹಾಗೂ ಮಾದರಿಯ ಬ್ರೋಚರ್ಸ್, ಕ್ಯಾಟ್ಲಾಗ್ಸ್ ವಿತ್ ಟೆಕ್ನಿಕಲ್ ಸ್ಪೆಸಿಫಿಕೇಷನ್, ಆರ್ಥಿಕ ಸ್ಥಿತಿ, ವಾರ್ಷಿಕ ವಹಿವಾಟು ಮತ್ತು ಇತರೆ ಸಂಬಂಧಪಟ್ಟ ದಾಖಲಾತಿಗಳೊಂದಿಗೆ ಮೊಹರು ಮಾಡಿದ ಕವರಿನಲ್ಲಿ ಈ ಕಛೇರಿಯ ಡೆಪ್ಯುಟಿ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ (ಕೇಂದ್ರಸ್ಥಾನ-1) ರವರಾದ ಶ್ರೀ ಸಂಜಯ್ ಸಹಾಯ್, ಐ.ಪಿ.ಎಸ್. ರವರಿಗೆ ಹೆಸರಿಸಿ, ದಿನಾಂಕ: 24.12.2004 ರ ಸಂಜೆ 5.00 ಗಂಟೆಯೊಳಗೆ ಸಲ್ಲಿಸತಕ್ಕದ್ದು. ಈ ದಿನಾಂಕದ ನಂತರದ ಟೆಂಡರ್‌ಗಳನ್ನು ಅಂಗೀಕರಿಸಲಾಗುವುದಿಲ್ಲ. ಮೊಹರು ಮಾಡಿದ ಲಕೋಟೆಯ ತುದಿಯಲ್ಲಿ "ಮಾಲಿನ್ಯ ನಿಯಂತ್ರಣ ಉಪಕರಣಗಳನ್ನು ಸರಬರಾಜು ಮಾಡುವ ಬಗ್ಗೆ ಅರ್ಜಿ" ಎಂದು ನಮೂದಿಸಿರಬೇಕು ಹಾಗೂ ಲಕೋಟೆಯು ಸರಬರಾಜು ಮಾಡಲು ಬಯಸುವ ಸಂಸ್ಥೆಯ ವಿಳಾಸವನ್ನು ಒಳಗೊಂಡಿರಬೇಕು. ಸ್ವೀಕರಿಸಿದ ಟೆಂಡರ್‌ಗಳನ್ನು ದಿನಾಂಕ: 27.12.2004 ರಂದು ಬೆಳಿಗ್ಗೆ 11.00 ಗಂಟೆಗೆ ಈ ಕಛೇರಿಯಲ್ಲಿ ತೆರೆಯಲಾಗುವುದು. ಇಚ್ಛೆಯುಳ್ಳ ಟೆಂಡರ್‌ದಾರರು ಟೆಂಡರ್‌ಗಳನ್ನು ತೆರೆಯುವ ಕಾರ್ಯಕ್ರಮದಲ್ಲಿ ಭಾಗವಹಿಸಲು ಅವಕಾಶ ನೀಡಲಾಗುವುದು.

ಪ್ರತಿ ಉಪಕರಣಗಳಿಗೆ ಪ್ರತ್ಯೇಕವಾಗಿ ಇ.ಎಂ.ಡಿ.ಯನ್ನು ಡಿಮ್ಯಾಂಡ್ ಡ್ರಾಫ್ಟ್ ಮೂಲಕ ಪಾವತಿಸದಿದ್ದರೆ ಅಂತಹ ಅರ್ಜಿಗಳನ್ನು ತಿರಸ್ಕರಿಸಲಾಗುವುದು ಮತ್ತು ಟೆಂಡರ್‌ದಾರರು ಅಂಚೆ ಮೂಲಕ/ ಕೊರಿಯರ್ ಮೂಲಕ ಕಳುಹಿಸುವ ಟೆಂಡರ್ ಅರ್ಜಿ ಮತ್ತು ದಾಖಲಾತಿಗಳು ತಡವಾಗಿ ತಲುಪಿದಲ್ಲಿ/ ನಾಶವಾದಲ್ಲಿ ಇಲಾಖೆಯು ಜವಾಬ್ದಾರಿಯಲ್ಲ. ಇಲಾಖೆಯು ಯಾವುದೇ ಕಾರಣವನ್ನು ನೀಡದೆ ಸಾರಾಸಗಟಾಗಿ/ ಭಾಗಶಃ ಒಪ್ಪಿಕೊಳ್ಳುವ, ಹೆಚ್ಚು ಮತ್ತು ಕಡಿಮೆ ಮಾಡುವ ಅಥವಾ ತಿರಸ್ಕರಿಸುವ ಹಕ್ಕನ್ನು ಕಾಯ್ದಿರಿಸಿದೆ.

ಪಿ.ಆರ್.534 ಡೈರೆಕ್ಟರ್ ಜನರಲ್ ಮತ್ತು ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ರವರ ಪರವಾಗಿ.